

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಡಾ: ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1385 |
| ಉತ್ತರಿಸಬೇಕಾದ ದಿನಾಂಕ | : | 09.03.2022 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ ಸಚಿವರು. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಪಶುಸಂಗೋಪನೆ ಇಲಾಖೆಯಿಂದ ರೈತರಿಗೆ ಸಿಗುವ ಯೋಜನೆಗಳು ಯಾವುವು; (ವಿವರ ಒದಗಿಸುವುದು) | 2021-22 ನೇ ಸಾಲಿನಲ್ಲಿ ಪಶು ಸಂಗೋಪನೆ ಇಲಾಖೆಯ ವತಿಯಿಂದ ರೈತರಿಗೆ ಸಿಗುವ ಯೋಜನೆಗಳ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ | ಪಶು ಭಾಗ್ಯ ಯೋಜನೆಯಡಿ ಫಲಾನುಭವಿಗಳ ಆಯ್ಕೆಗೆ ಅನುಸರಿಸಲಾಗುವ ಮಾನದಂಡಗಳೇನು; | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮತ್ತು ಇತರೆ ಜನಾಂಗದ ಕೂಲಿ ಕೃಷಿ ಕಾರ್ಮಿಕರು ಭೂರಹಿತರು ಮತ್ತು ಆರ್ಥಿಕವಾಗಿ ಹಿಂದುಳಿದ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು.<br><br>ಸರ್ಕಾರದ ನಿಯಮಗಳಂತೆ ಮಹಿಳೆಯರಿಗೆ (ಶೇ.33.3), ವಿಶೇಷ ಚೇತನರಿಗೆ (ಶೇ.3) ಆದ್ಯತೆ ನೀಡಲಾಗುವುದು.<br><br>ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಫಲಾನುಭವಿಗಳು RD No. ಇರುವ ಜಾತಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಹೊಂದಿರಬೇಕು.<br><br>ಇತರೆ ಜನಾಂಗದ ಫಲಾನುಭವಿಗಳು ಬಿ.ಪಿ.ಎಲ್ ಕಾರ್ಡ್ ಕಡ್ಡಾಯವಾಗಿ ಹೊಂದಿರಬೇಕು.<br><br>ಅರ್ಜಿದಾರರು FRUITS ತಂತ್ರಾಂಶದಲ್ಲಿ ನೊಂದಾಯಿಸಿರಬೇಕು.<br><br>ವಿಧಾನಸಭಾ ಕ್ಷೇತ್ರದ ಶಾಸಕರ ಅಧ್ಯಕ್ಷತೆಯ ತಾಲ್ಲೂಕು ಮಟ್ಟದ ಆಯ್ಕೆ ಸಮಿತಿ ಸಭೆಯಲ್ಲಿ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು. |
| ಇ | ಈ ಯೋಜನೆಗೆ ವಾಣಿಜ್ಯ ಬ್ಯಾಂಕುಗಳಲ್ಲಿ ಸಾಲ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರವು ಕೈಗೊಳ್ಳಬಹುದಾದ ಕ್ರಮಗಳೇನು? | ಬಂದಿರುತ್ತದೆ.<br>ರಾಜ್ಯಮಟ್ಟದ ಬ್ಯಾಂಕರ್ ಸಭೆಯಲ್ಲಿ ಹಾಗೂ ಜಿಲ್ಲಾಮಟ್ಟದ ಮಾರ್ಗದರ್ಶಿ ಬ್ಯಾಂಕ್ ಸಭೆಯಲ್ಲಿ ಇಲಾಖೆವತಿಯಿಂದ ಸೂಕ್ತ ನಿರ್ದೇಶನ ನೀಡಲಾಗುತ್ತಿದೆ. ಕೆಲವು ಯೋಜನೆಗಳಲ್ಲಿ ಫಲಾನುಭವಿಗಳ ವಂತಿಕೆಯೊಂದಿಗೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. |

ಇ-ಪಸಂಮೀ 63 ಸಲೆವಿ 2022

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1385 ಕ್ಕೆ ಅನುಬಂಧ

ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಿಂದ ಪಶುಸಂಗೋಪನೆಯ ಅಭಿವೃದ್ಧಿಗಾಗಿ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

| ಕ್ರ ಸಂ | ಕಾರ್ಯಕ್ರಮ | ವಿವರ |
|---|---|---|
| 1 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013ರ ಅನ್ವಯ ಬಳಕೆಯಾಗದ ಮೊತ್ತ | • ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಹಾಲು ಕರೆಯುವ ಯಂತ್ರ ಮತ್ತು ಹಸುಗಳ ನೆಲಹಾಸು ಇವುಗಳನ್ನು ಶೇ. 90 ರ ಸಹಾಯಧನದೊಂದಿಗೆ ವಿತರಿಸಲಾಗುವುದು. |
| 2. | ಲಸಿಕಾ ಕಾರ್ಯಕ್ರಮ | • ರಾಷ್ಟ್ರೀಯ ಜಾನುವಾರು ರೋಗ ನಿಯಂತ್ರಣ ಯೋಜನೆಯಡಿ<br>• ಜಾನುವಾರುಗಳಗೆ ಕಾಲುಬಾಯಿಜ್ವರ ಮತ್ತು ಕಂದುರೋಗಗಳ ವಿರುದ್ಧ ಲಸಿಕಾ ಕಾರ್ಯಕ್ರಮಕ್ಕೆ<br>• ಆಸ್ಕಾಡ್ ಯೋಜನೆಯಡಿಯಲ್ಲಿ ಗಳಲೇರೋಗ, ಚಪ್ಪೆರೋಗ, ಕರುಳುಬೇನೆ, ನೆರಡಿರೋಗ ಮತ್ತು ಪಿ.ಪಿ.ಆರ್ ರೋಗದ ವಿರುದ್ಧ ಲಸಿಕೆ ಹಾಕುವುದು |
| 3 | ಪಿಂಜರಾಪೋಲ್ ಮತ್ತು ಇತರೆ ಗೋಶಾಲೆಗಳಿಗೆ ಬೆಂಬಲ | • ಪಿಂಜರಾಪೋಲ್ ಹಾಗೂ ಇತರೆ ಗೋಶಾಲೆಗಳಲ್ಲಿರುವ ಪ್ರಾಣಿಗಳ ನಿರ್ವಹಣೆಗಾಗಿ ಖಾಸಗಿ ಗೋಶಾಲೆಗಳಿಗೆ ಸಹಾಯಾನುದಾನ<br>• ಪ್ರತಿ ಜಿಲ್ಲೆಗೆ ಒಂದರಂತೆ ಸರ್ಕಾರಿ ಗೋಶಾಲೆ ನಿರ್ಮಾಣ |
| 4 | ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ | • ನಿಗಮದಲ್ಲಿ ನೊಂದಣಿಯಾಗಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳ ಪರಿಶಿಷ್ಟ ಪಂಗಡದ ಸದಸ್ಯರುಗಳಿಗೆ 6+1 ಕುರಿ/ಮೇಕೆ ಘಟಕ ವಿತರಿಸುವುದು,<br>• ವಲಸೆ ಕುರಿಗಾಗರಿಗೆ ಸಂಚಾರಿ ಟೆಂಟ್, ಸೋಲಾರ್ ಟಾರ್ಚ್, ರಬ್ಬರ್ ಪ್ಲೋರ್ ಮ್ಯಾಟ್ ಮತ್ತು ರೇನ್ ಕೋಟ್ ಸೇರಿದಂತೆ ಪರಿಕರಗಳ ಕಿಟ್‌ಗಳ ವಿತರಣೆ ಮಾಡಲಾಗುವುದು.<br>• ಕುರಿಗಾರರಿಗೆ ವೈಜ್ಞಾನಿಕ ಕುರಿ ಸಾಕಾಣಿಕೆಯಲ್ಲಿ ತರಬೇತಿ ನೀಡಲಾಗುವುದು. |
| 5 | ರಾಷ್ಟ್ರೀಯ ಜಾನುವಾರು ಮಿಷನ್ (ಕೇಂದ್ರ ಪುರಸ್ಕೃತ ಯೋಜನೆ) | • ಜಾನುವಾರು ವಿಮಾ ಯೋಜನೆ, |
| 6 | ಹಾಲು ಉತ್ಪಾದಕರಿಗೆ ಉತ್ತೇಜನ | • ಹಾಲು ಉತ್ಪಾದನೆಗೆ ಉತ್ತೇಜನ ನೀಡಲು ಕರ್ನಾಟಕ ಹಾಲು ಮಹಾ ಮಂಡಳಿಗೆ ಹಾಲು ಸರಬರಾಜು ಮಾಡುವ ಸದಸ್ಯರಿಗೆ ಪ್ರತಿ ಲೀಟರ್‌ಗೆ ರೂ. 5/- ರಂತೆ ಪ್ರೋತ್ಸಾಹಧನ ನೀಡಲಾಗುವುದು. |
| 7 | ವಿಸ್ತರಣಾ ಘಟಕಗಳ ಬಲಪಡಿಸುವಿಕೆ | • ಮಿಶ್ರತಳಿ ಕರುಗಳ/ ಜಾನುವಾರು ಪ್ರದರ್ಶನ, ಹಾಲು ಕರೆಯುವ ಸ್ಪರ್ದೆ, ಪ್ರಾಣಿ ಜನ್ಯ ರೋಗಗಳ ಜಾಗೃತಿ ಶಿಬಿರ ರೈತರ ತರಬೇತಿ ಮತ್ತು ಪ್ರವಾಸ, ಜಿಲ್ಲಾ ಮಟ್ಟದ ಪಶುಮೇಳ, ಜಾನುವಾರು ಜಾತ್ರೆ, ತಾಂತ್ರಿಕ ಸಂಕಿರಣ. |

| | | |
|---|---|---|
| 8 | ಜಾನುವಾರುಗಳ ಆರೋಗ್ಯ ಶಿಬಿರ | • ಉಚಿತ ಜಾನುವಾರು ಚಿಕಿತ್ಸಾ ಶಿಬಿರಗಳನ್ನು ಏರ್ಪಡಿಸುವ ಮೂಲಕ ಜಾನುವಾರುಗಳ ಆರೋಗ್ಯ ತಪಾಸಣೆ ಮಾಡಲಾಗುತ್ತಿದೆ. |
| 9 | ಮುಖ್ಯಮಂತ್ರಿಗಳ ಜೀವನ ಯೋಜನೆ | • ಆರ್ ಕೆ ವಿ ವೈ, ಅನುದಾನದಲ್ಲಿ ಕೃಷಿ ಕಾರ್ಮಿಕರು, ವಿಧವೆಯರು, ದೇವದಾಸಿಯರು, ನಿರ್ಗತಿಕ ಮಹಿಳೆಯರಿಗೆ ಸ್ವಾವಲಂಬಿ ಜೀವನವನ್ನು ನಡೆಸಲು ಹೈನು ಘಟಕ, ಕುರಿ/ಮೇಕೆ ಘಟಕ ಮತ್ತು ಹಂದಿ ಘಟಕ ಸ್ಥಾಪನೆ ಮಾಡಲು ಸಹಾಯಧನ ನೀಡಲಾಗುತ್ತಿದೆ. |
| 10 | ಪಶು ಸಂಜೀವಿನಿ | • ಪಶುಪಾಲಕರ ಮನೆಯ ಬಾಗಿಲಲ್ಲಿ ರೋಗಗ್ರಸ್ಥ ಜಾನುವಾರುಗಳಿಗೆ ವಿಶೇಷ ತುರ್ತು ಚಿಕಿತ್ಸೆ ನೀಡಲು 15 ಜಿಲ್ಲೆಗಳಲ್ಲಿ 'ಸುಸಜ್ಜಿತ ಪಶುಚಿಕಿತ್ಸಾ ವಾಹನಗಳನ್ನು ಒದಗಿಸಲಾಗಿದೆ. |
| 11 | ಅಮೃತ ಸಿರಿ | • ಇಲಾಖೆಯ ಎಲ್ಲಾ ಜಾನುವಾರು ಕ್ಷೇತ್ರಗಳಲ್ಲಿ ಹುಟ್ಟುವ ಹೆಚ್ಚುವರಿ ಹೆಣ್ಣು ಕರುಗಳನ್ನು/ ಕಡಸುಗಳನ್ನು/ ಹಸುಗಳನ್ನು ಪುಸ್ತಕ ಬೆಲೆಯ ಶೇಕಡ 25 ರಂತೆ ಜಿಲ್ಲೆಯ ರೈತರಿಗೆ, ದೇವದಾಸಿಯರಿಗೆ, ವಿಧವೆಯರಿಗೆ, ಶವ ಸಂಸ್ಕಾರ ಕಾರ್ಮಿಕರಿಗೆ ವಿತರಣೆ ಮಾಡಲಾಗುವುದು. |
| 12 | ಅಮೃತ ಧಾರೆ | • ಇಲಾಖೆಯ ಎಲ್ಲಾ ಜಾನುವಾರು ಕ್ಷೇತ್ರಗಳಲ್ಲಿ ಹುಟ್ಟುವ ಹೆಚ್ಚುವರಿ ಗಂಡು ಕರುಗಳನ್ನು/ ಬೀಜದ ಹೋರಿಗಳನ್ನು ಇಲಾಖೆ ನಿಗದಿ ಪಡಿಸಿದ ಮಾರಾಟದ ಬೆಲೆಯಂತೆ ರೈತರಿಗೆ ವಿತರಣೆ ಮಾಡಲಾಗುವುದು. |
| 13 | ಸಮಗ್ರ ಗೋಸಂಕುಲ ಸಮೃದ್ಧಿ ಯೋಜನೆ | • ಗಿರ್, ಸಾಹಿವಾಲ್, ಥಾರ್ ಪಾರ್ಕರ್, ಓಂಗೋಲ್, ದೇವಣಿ ತಳಿಗಳ ಮಾತೃ ಕೇಂದ್ರವನ್ನು ಸ್ಥಾಪಿಸುವುದು. |
| 14 | ಪ್ರಾಣಿ ಕಲ್ಯಾಣ ಸಹಾಯವಾಣಿ | • ಜಾನುವಾರುಗಳಿಗೆ 24/7 ನಿರಂತರ ಸೇವೆಯನ್ನು ಒದಗಿಸಲು ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಿಂದ ರೈತರಿಗೆ ಸಹಾಯವಾಣಿಯನ್ನು ಪ್ರಾರಂಭಿಸಲಾಗಿದ್ದು ಸಹಾಯವಾಣಿ ಸಂಖ್ಯೆ: 8277100200 ಮೂಲಕ ಸಂಪರ್ಕಿಸಿ ಇಲಾಖೆಯ ತಾಂತ್ರಿಕ ಸೇವೆಯನ್ನು ಪಡೆಯಬಹುದಾಗಿದೆ. |
| 15 | ಕೃತಕ ಗರ್ಭಧಾರಣೆ | • ರಾಜ್ಯದಲ್ಲಿರುವ ಎಲ್ಲಾ ಪಶುವೈದ್ಯಕೀಯ ಸಂಸ್ಥೆಗಳಲ್ಲಿ ಕೃತಕ ಗರ್ಭಧಾರಣೆ ಮಾಡಲಾಗುತ್ತಿದೆ. |